


# ಜ್ಯೋತಿಷ ಮಿತ್ರ

## ಆನ್‌ಲೈನ್ ದಿನಪತ್ರಿಕೆ

www.jyothishamithra.com

ಸಂಚಿಕೆ : 1220 02-01-2022 ಭಾನುವಾರ

ಪ್ಲವನಾಮ ಸಂವತ್ಸರ ದಕ್ಷಿಣಾಯಣ
ಹೇಮಂತಋತು ಮಾರ್ಗಶಿರಮಾಸ ಕೃಷ್ಣಪಕ್ಷ

| ನಿತ್ಯ ಪಂಚಾಂಗ | ಸುಜ್ಞಾನ |
| --- | --- |
| ತಿಥಿ : ಅಮವಾಸ್ಯಾ (24:02)<br>ನಕ್ಷತ್ರ : ಮೂಲಾ (16:22)<br>ರಾಹುಕಾಲ :<br>04:50 PM - 06:16 PM<br>ಗುಳಿಕಕಾಲ :<br>03:25 PM - 04:50 PM | ಜಗತ್ತಿನಲ್ಲಿ ಒಂದೇ ಸಮಾನವಾಗಿ ನೋಡುವುದು 'ಸಮಯ' ಮಾತ್ರ. ಬಡವನಿಗೂ ಒಂದೇ.... ಶ್ರೀಮಂತನಿಗೂ ಒಂದೇ.... |



# ಗಜಕೇಸರಿ ಯೋಗ - ಗುರುಚಾಂಡಾಲ ದೋಷ

# ಇರುವ ಜಾತಕ

ಇದು ಮಿಥುನ ಲಗ್ನ, ಮಿಥುನ ರಾಶಿಯ ಜಾತಕವಾಗಿದೆ. ಲಗ್ನದಲ್ಲಿ ಚಂದ್ರನಿರುವುದರಿಂದ ಸೂಕ್ಷ್ಮ ಸ್ವಭಾವದರಾಗಿರುತ್ತಾರೆ. ಪ್ರವಾಸ ಪ್ರಿಯರರಾದ ಇವರು ಬುದ್ಧಿವರರು, ವಿದ್ಯಾವಂತರು ಮಾತ್ರವಲ್ಲದೆ ತನ್ನ ವಾಕ್ಚಾತುರ್ಯದಿಂದ ಎಂತವರನ್ನೂ ತನ್ನತ್ತ ಆಕರ್ಷಿಸುವವ ಅದ್ಭುತವಾದ ಶಕ್ತಿ ಇವರಿಗಿದೆ.

ಈ ಜಾತಕರು ಮಿಥುನ ಲಗ್ನ (ವಾತ ವಾಯು ರಾಶಿ),

ನವಾಂಶ ಲಗ್ನ ಮೀನ ( ಜಲ ಶೀತ ರಾಶಿ) ಇದರಿಂದ ಜಾತಕರ ಶರೀರ ಶೀತವಾತದಿಂದ ಕೂಡಿರುತ್ತದೆ. ನವಾಂಶ ಲಗ್ನದಲ್ಲಿ ಶನಿ ಇರುವುದರಿಂದ ಶ್ರಮಜೀವಿ. ರಾಶಿಕುಂಡಲಿಯಲ್ಲಿ ಸುಖಕಾರಕನಾದ ಶುಕ್ರನನ್ನು ಶನಿ ನೋಡುವುದರಿಂದ ಶ್ರಮಪಟ್ಟು ಸುಖವನ್ನು ಪಡಬೇಕು.

| | | | |
|---|---|---|---|
| ಗುರು ರಾಹು | ಕುಜ | | ಲಗ್ನ ಚಂದ್ರ |
| ಬುಧ ರವಿ | ಪುರುಷ<br>08-03-1987<br>ರಾಶಿ ಕುಂಡಲಿ | | |
| ಶುಕ್ರ | | | |
| | ಶನಿ | | ಕೇತು |

| | | | |
|---|---|---|---|
| ಲಗ್ನ ಶನಿ | ಶುಕ್ರ | ರವಿ | ಕೇತು |
| | ನವಾಂಶ ಕುಂಡಲಿ | | |
| | | | |
| ರಾಹು ಬುಧ | | ಚಂದ್ರ | ಕುಜ ಗುರು |

ಲಗ್ನಾಧಿಪತಿ ಬುಧನು ಅಗ್ನಿಗ್ರಹ ರವಿಯೊಂದಿಗಿದ್ದು, ನವಾಂಶ ಕುಂಡಲಿಯಲ್ಲಿ ಕುಜನು ಅಗ್ನಿಗ್ರಹವಾಗಿ ಲಗ್ನವನ್ನು ನೋಡುವನು. ಇದರಿಂದ ಶರೀರ ಉಷ್ಣದಿಂದ ಕೂಡಿದ್ದು, ಲಗ್ನಾಧಿಪತಿ ಬುಧನು ಆರೋಗ್ಯ ಕಾರಕನಾದ ರವಿಯೊಂದಿಗಿದ್ದು, ಜೀವಕಾರಕ, ನಿರೋಗಕಾರಕ ಗುರು ಬಲಿಷ್ಠನಾಗಿ ನವಾಂಶ ಲಗ್ನವನ್ನು ನೋಡುವುದರಿಂದ

ಸ್ಥೂಲ ಶರೀರ, ಲಗ್ನದಲ್ಲಿ ದ್ವಿತೀಯಾಧಿಪತಿ ಚಂದ್ರನಿದ್ದು, ಚಂದ್ರನಿಗೆ ದಶಮದಲ್ಲಿ ಗುರುವಿರುವುದರಿಂದ ಗಜಕೇಸರಿ ಯೋಗವಿದೆ. ಗುರುವಿನೊಂದಿಗೆ ರಾಹು ಇರುವುದರಿಂದ ಗುರುಚಾಂಡಾಲ ದೋಷವಿದೆ.

ಲಗ್ನಾಧಿಪತಿ ಬುಧನು, ದಶಮದಲ್ಲಿರುವ ರಾಹುವಿನ ನಕ್ಷತ್ರದಲ್ಲಿರುವನು. ಇದರಿಂದ ಜಾತಕರು ತೀವ್ರ ಆಲೋಚನಾಕಾರರು. ಬುಧನು ಭಾಗ್ಯಭಾವದಲ್ಲಿ ಇರುವುದರಿಂದ ಜ್ಞಾನಿ, ವೇದಾಂತಿ, ಇತರರಿಗೆ ಸಹಾಯ ಮಾಡುವ ಗುಣ, ಊಹಾಪೋಹ ಜ್ಞಾವಿರುತ್ತದೆ. ಬುಧನು ಪಿತೃಕಾರಕನಾದ ರವಿಯೊಂದಿಗೆ ಪಿತೃಸ್ಥಾನದಲ್ಲಿ ಇರುವುದರಿಂದ ತಂದೆಯ ಗುಣವನ್ನೇ ಜಾತಕರು ಹೋಲಿರುವರು.




ನಮ್ಮ ಪೂರ್ವ ಜನ್ಮದಿಂದ ಹಿಂಬಾಲಿಸಿಕೊಂಡು ಬಂದಿರುವ ಕಾಯಿಲೆಗಳು, ಅನುವಂಶಿಕವಾಗಿ ಈ ಜನ್ಮದಲ್ಲೂ ಕಾಡುತ್ತವೆ. ಇದಕ್ಕೆ ಕಾರಣ, ನಮ್ಮ



ಜೀವವು ನಮಗೆ ನಮ್ಮ ಹಿಂದಿನ ಕರ್ಮಗಳನ್ನು

ಅನುಭವಿಸಲು ತಕ್ಕ ವಾಹನವನ್ನು (ದೇಹಕ್ಕಾಗಿ) ಕೊಡಬಲ್ಲ ತಾಯಿ ತಂದೆಯರನ್ನು ಹುಡುಕಿಕೊಂಡು ಬಂದಿರುತ್ತದೆ. ರವಿಯು ದೇಹದ ತುಂಬ ಅವಶ್ಯಕವಾದ ಭಾಗಗಳನ್ನು, ಮತ್ತು ಅವಯವಗಳ ರಚನೆಯನ್ನು ಆಳುವನು. ಬಹಳ ಮುಖ್ಯವಾಗಿ ಹೃದಯವನ್ನು ನಿಯಂತ್ರಿಸುವನು. ರವಿಯು ತುಂಬ ಕಲುಷಿತನಾಗಿದ್ದರೆ, ದೃಷ್ಟಿಯು ಬಲಹೀನವಾಗಿರುತ್ತದೆ.

ರವಿಗ್ರಹನೊಬ್ಬನನ್ನೇ ಕಾಯಿಲೆಗಳಿಗೆ ಪರಿಶೀಲಿಸಿದಾಗ,



ಅದು ಪ್ರಮುಖವಾಗಿ ಹೃದಯ, ಮೆದುಳು ಮತ್ತು ಕಣ್ಣುಗಳಿಗೆ ಸಂಬಂಧಿಸಿರುತ್ತದೆ. ನಾಡಿ ಮಿಡಿತದಲ್ಲಿ ಏರಿಳಿತಗಳು, ಮುಖದಲ್ಲಿನ ಮೊಡವೆ, ಉಷ್ಣಸಂಬಂಧದ ತೊಂದರೆಗಳು,



ರಕ್ತನಾಳಗಳಲ್ಲಿನ ಆಡಚಣೆಗಳು ಇತ್ಯಾದಿಗಳು ರವಿಯ ಆಧಿಪತ್ಯಕ್ಕೆ ಒಳಪಟ್ಟಿರುತ್ತದೆ. ಪುರುಷರಲ್ಲಿ ಬಲಗಣ್ಣು, ಸ್ತ್ರೀಯರಲ್ಲಿ ಎಡಗಣ್ಣು, ಮೂರ್ಛೆ, ತಲೆ ತಿರುಗುವಿಕೆ, ಜ್ವರ, ಮೆದುಳಿನಲ್ಲಿ ತೊಂದರೆ, ದುರ್ಗಂಧ, ಕಣ್ಣಿನ ಪೋರೆ, ಶೀತದಿಂದ ದೇಹದ ಅವಯವಗಳು ಸೆಟೆಯುವಿಕೆ, ಇತ್ಯಾದಿಗಳ ಬಾಧೆ ಇರುತ್ತದೆ.

ರವಿಯು ದ್ವಿಸ್ವಭಾವ ರಾಶಿಗಳಲ್ಲಿ ಕಲುಷಿತನಾಗಿದ್ದರೆ, ರವಿಗೆ ಸಂಬಂಧದಿಂದ ಕಾಯಿಲೆಗಳು ಉಂಟಾಗುತ್ತವೆ. ರವಿಯು ಕೇಂದ್ರಗಳಲ್ಲಿ ಉಚ್ಛ, ಸ್ವರಾಶಿಗತನಾಗಿದ್ದರೆ ಜಾತಕರಲ್ಲಿ ರೋಗ ನಿರೋಧಕ ಶಕ್ತಿಯು ಹೆಚ್ಚಾಗಿರುತ್ತದೆ.